**ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್-1), ಡಿ.ವ್ಹಿ.ಓ. ಗುಲಬರ್ಗಾ**

**ಸುತ್ತೋಲೆ**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22) ಅಡಿಯಲ್ಲಿ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಗಾಂಧಿ ನಗರ, ಬೆಂಗಳೂರು ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್ 5(2) ರಡಿಯಲ್ಲಿ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್ 19(1)ರ ಅಡಿಯಲ್ಲಿ 'ಮೇಲ್ಮನವಿ ಪ್ರಾಧಿಕಾರ' ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|
| 1. | ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು, (ಆಡಿಟ್-1), ಡಿವಿಓ. ಗುಲಬರ್ಗಾ. | ಶ್ರೀ ಪದ್ಮಾಕರ ಆರ್. ಕುಲಕರ್ಣಿ, ವಾ.ತೆ.ಉ.ಆಯುಕ್ತರು (ಆಡಿಟ್-1) ಡಿವಿಓ. ಗುಲಬರ್ಗಾ. | ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಆಡಳಿತ), ವಿಭಾಗೀಯ ವಾಣಿಜ್ಯ ತೆರಿಗೆ ಕಛೇರಿ, ಗುಲಬರ್ಗಾ. |
| 2. | ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್-1), ಗುಲಬರ್ಗಾ. | ಶ್ರೀ ಹೆಚ್.ಎಸ್. ಬಸವಪ್ರಭು, ವಾ.ತೆ.ಸ.ಆಯುಕ್ತರು (ಆಡಿಟ್-1), ಗುಲಬರ್ಗಾ. | |
| 3. | ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, (ಆಡಿಟ್-2), ಗುಲಬರ್ಗಾ. | ಶ್ರೀ ವಿಶ್ವನಾಥ, ವಾ.ತೆ.ಸ. ಆಯಕ್ತರು, (ಆಡಿಟ್-2), ಗುಲಬರ್ಗಾ. | |

ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು
(ಆಡಿಟ್-1) ಡಿ.ವ್ಹಿ.ಓ. ಗುಲಬರ್ಗಾ.

**ಕರ್ನಾಟಕ ಸರಕಾರ**

**ದಿನಾಂಕ 1ನೇ ಅಕ್ಟೋಬರ್ 2009**

**ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್-1), ಡಿವ್ಹಿ.ಓ. ಗುಲಬರ್ಗಾ**

**ಮಾಹಿತಿ ಹಕ್ಕು ಕೈಪಿಡಿ-2005 ಸೆಕ್ಷನ್ 4(1)(ಬಿ) ಅನ್ವಯ**

1. ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು:

ಅ) ಸಂಸ್ಥೆಯ ಹೆಸರು: ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್-1), ಡಿವ್ಹಿ.ಓ. ಗುಲಬರ್ಗಾ.

ಆ) ರಚನೆ

| ತಾಂತ್ರಿಕ ಶಾಖೆ | ಆಡಳಿತ ಶಾಖೆ |
|---|---|
| 1) ವಾಣಿಜ್ಯ ತೆರಿಗೆ ಪರಿವೀಕ್ಷಕರು-8 | 1) ಪ್ರಥಮ ದರ್ಜೆ ಸಹಾಯಕರು-01<br>2) ದ್ವಿತೀಯ ದರ್ಜೆ ಸಹಾಯಕರು-02<br>3) ಬೆರಳಚ್ಚುಗಾರರು-02<br>4) ಕರ ವಸೂಲಿಗಾರರು-01 |

ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು
(ಆಡಿಟ್-1) ಡಿ.ವ್ಹಿ.ಓ. ಗುಲಬರ್ಗಾ.

**2ಇ) ಕಾರ್ಯಗಳು ಮತ್ತು ಕರ್ತವ್ಯಗಳು:**

1) ಮಾನ್ಯ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಬೆಂಗಳೂರು ಇವರು ನಿಯೋಜಿಸಿರುವ ವಾಣಿಜ್ಯ ತೆರಿಗೆ ಇಲಾಖೆಯ ಗುಲಬರ್ಗಾ ವಿಭಾಗ ಕಛೇರಿಯ ಅಡಿಯಲ್ಲಿ ಬರುವ ವರ್ತಕರ ಪ್ರಕರಣಗಳಲ್ಲಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ-2003, ಕೇಂದ್ರ ಮಾರಾಟ ತೆರಿಗೆ ಕಾಯ್ದೆ 1956, ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ 1979ರ ಅಡಿಯಲ್ಲಿ ಮರು ಕರ ನಿರ್ಧಾರಣೆ, ಕರ ನಿರ್ಧಾರಣೆ ಪ್ರಕರಣಗಳನ್ನು ಕೈಗೊಳ್ಳುವುದು. ಹೆಚ್ಚುವರಿಯಾಗಿ ನಿರ್ಮಾಣಗೊಂಡ ತೆರಿಗೆ, ದಂಡ, ಬಡ್ಡಿಯ ವಸೂಲಾತಿಗೆ ಕ್ರಮಕೈಗೊಳ್ಳುವುದು.

2) ಮಾನ್ಯ ಜಂಟಿ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ವಿಭಾಗೀಯ ಕಛೇರಿಯ ಗುಲಬರ್ಗಾ, ಇವರು ಆದೇಶಿಸಿದ ಇತರೇ ಕೆಲಸ ಕಾರ್ಯಗಳನ್ನು ಕೈಗೊಳ್ಳುವುದು.

**3) ಅಧಿಕಾರಿಗಳು ಮತ್ತು ಸಿಬ್ಬಂದಿ: ಅಧಿಕಾರ ಮತ್ತು ಕರ್ತವ್ಯಗಳು:**

1) ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್–1) ಮತ್ತು ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್–1) ಹಾಗೂ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್–2) ಗುಲಬರ್ಗಾ ಕ್ರ.ಸಂ.2(ಇ) ನಲ್ಲಿ ತಿಳಿಸಿರುವಂತೆ.

**2) ವಾಣಿಜ್ಯ ತೆರಿಗೆ ಪರಿವೀಕ್ಷಕರು:**

ವರ್ತಕರು ಮರು ಕರ ನಿರ್ಧಾರಣೆ/ ಕರ ನಿರ್ಧಾರಣೆ ಪ್ರಕರಣಗಳಲ್ಲಿ ಹಾಗೂ ತೆರಿಗೆ ಬಾಕಿ ವಸೂಲಾತಿ ನಡಾವಳಿಗಳಲ್ಲಿ ಅಧಿಕಾರಿಗಳಿಗೆ ಸಹಾಯ ಮಾಡುವುದು.

**3) ಪ್ರಥಮ ದರ್ಜೆ ಸಹಾಯಕರು:**

ಸಾಮಾನ್ಯ ನಗದು ಪುಸ್ತಕ, ಕ್ಯಾಷ್ ಬುಕ್ ನಿರ್ವಹಣೆ, ವಾರ್ಷಿಕ ಆಡಳಿತ ವರದಿ ಸಲ್ಲಿಕೆ, ಆಡಳಿತ ಶಾಖೆಗೆ ಸಂಬಂಧಿಸಿದ ಕಡತಗಳ ವಿಲೇವಾರಿ ಅಧಿಕಾರಿಗಳು ವಹಿಸಿದ ಇತರೆ ಕೆಲಸಗಳು.

**4) ದ್ವಿತೀಯ ದರ್ಜೆ ಸಹಾಯಕರು–1**

ಉಗ್ರಾಣ ಶಾಖೆಗೆ ಸಂಬಂಧಿಸಿದ ವ್ಯವಹಾರ, ಆಯಾ ಅವಧಿಗೆ ಸಲ್ಲಿಸಬೇಕಾದ ವರದಿಗಳ ತಯಾರಿಕೆ.

**5) ದ್ವಿತೀಯ ದರ್ಜೆ ಸಹಾಯಕರು–2:**

ಸಿಬ್ಬಂದಿ/ ಅಧಿಕಾರಿ/ ವೇತನ ಬಿಲ್ಲು ತಯಾರಿಕೆ ಹಾಗೂ ಸಲ್ಲಿಕೆ ಆಮದು ಮತ್ತು ರವಾನೆ ವಹಿ ನಿರ್ವಹಣೆ ಸ್ಟಾಂಪ್ ವಹಿ ನಿರ್ವಹಣೆ ಇತ್ಯಾದಿ.

**6) ದ್ವಿತೀಯ ದರ್ಜೆ ಸಹಾಯಕರು–3:**

**7) ಬೆರಳಚ್ಚುಗಾರರು:**

ಅಧಿಕಾರಿಗಳು ನೀಡಿದ ಕಾಗದ ಪತ್ರಗಳ ವರದಿಗಳನ್ನು ಬೆರಳಚ್ಚು ಮಾಡುವುದು.

**8) ಕರ ವಸೂಲಿಗಾರರು:**

ನೋಟಿಸುಗಳನ್ನು, ದೇಶಗಳನ್ನು ವರ್ತಕರಿಗೆ, ಇತರೆ ಕಛೇರಿಗೆ ಜಾರಿಗೊಳಿಸುವುದು, ಸಲ್ಲಿಸುವುದು.

**9) ಜವಾನರು–1:**

ಕಡತ: ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹಾಗೂ ಹೊರಗೆ ಸಂಬಂಧಪಟ್ಟವರಿಗೆ ಸಲ್ಲಿಸುವುದು.

**10) ಜವಾನರು–2:**

ಕಡತ ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹಾಗೂ ಹೊರಗೆ ಸಂಬಂಧಪಟ್ಟವರಿಗೆ ಸಲ್ಲಿಸುವುದು.

**11) ಚಾಲಕರು–1:**

ವಾಣಿಜ್ಯ ತೆರಿಗೆಗಳ ಉಪ ಆಯುಕ್ತರ ಹಾಗೂ ಸಹಾಯಕ ಆಯುಕ್ತರ ಜೀಪನ್ನು ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದು. ಮತ್ತು ಕರ್ತವ್ಯ ನಿರ್ವಹಿಸಲು ವಾಹನ ನಡೆಸುವುದು.

**4) ಕಾರ್ಯನಿರ್ವಹಿಸುವವರಿಗೆ ಅನುಸರಿಸುವ ಮಾನದಂಡಗಳು:**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ–2003, ಕೇಂದ್ರ ಮಾರಾಟ ತೆರಿಗೆ ಕಾಯ್ದೆ 1956,

ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ 1979

5) ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು: ನಿಬಂಧನೆಗಳು ಸೂಚನೆಗಳು ಕೈಪಿಡಿ ಮತ್ತು ದಾಖಲೆಗಳು.

ಅ) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958

ಆ) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

ಇ) ಖಜಾನೆ ಸಂಹಿತೆ

ಈ) ಸಾದಿಲ್ವಾರು ವೆಚ್ಚದ ಕೈಪಿಡಿ

ಉ) ಕರ್ನಾಟಕ ನಾಗರೀಕರ ಸೇವೆಗಳು (ನಡತೆ ನಿಯಮಗಳು 1966)

ಊ) ಕರ್ನಾಟಕ ನಾಗರೀಕರ ಸೇವೆಗಳು (ಸಿಸಿಎ) ನಿಯಮಗಳು 1957

ಋ) ಕಾರ್ಯಾಲಯ ಕೈಪಿಡಿ

ಎ) ಸೇವಾ ನಿಯಮಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಆರ್ಥಿಕ ಇಲಾಖೆ ವಾ.ತೆ. ಇಲಾಖೆ ಹೊರಡಿಸಿದ ಆದೇಶದ ಸುತ್ತೋಲೆ ಸೂಚನೆಗಳು.

ಏ) ಇಲಾಖೆ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು.

**6) ಇಲಾಖೆಯು ಹೊರಡಿಸಿರುವ ದಸ್ತಾವೇಜುಗಳ ಪಟ್ಟಿ:**

1) ಕರ ನಿರ್ಧಾರಣೆ/ ಮರು ಕರ ನಿರ್ಧಾರಣೆ ಕೈಗೊಳ್ಳಲಾದ ವರ್ತಕರ ಕಡತಗಳು/ ವಹಿ.

2) ಹೆಚ್ಚುವರಿ ತೆರಿಗೆ, ಬಾಕಿ, ದಂಡ, ವಿಧಿಸಿರುವ ವಹಿ.
3) ಮೇಲ್ಮನವಿ ಪ್ರಾಧಿಕಾರಕ್ಕೆ ಸಲ್ಲಿಸಲಾದ ಕಡತಗಳ ವಿವರಗಳ ವಹಿ.
4) ಎಂ.ಐ.ಎಸ್. ಪ್ರತಿಗಳ ಕಡತ.
5) ದಿನಚರಿ ಸಲ್ಲಿಸಿದ ಕಡತಗಳ ವಿವರ
6) ಕಛೇರಿ ಆದೇಶ ವಹಿ.
7) ನೌಕರರ ಸೇವಾ ಪುಸ್ತಕಗಳು
8) ಆಮದು ವಹಿ
9) ರವಾನಿ ವಹಿ
10) ಸ್ಟಾಂಪ್ ವಹಿ

7) ನೀತಿ ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯವಿಧಾನದ ವಿವರಗಳು:

ಸಾರ್ವಜನಿಕ ಮಾಹಿತಿ ಅಧಿಕಾರಿಗಳಾಗಿ ನೇಮಕ ಮಾಡಲಾಗಿದೆ. ಇವರು ಸಂಬಂಧಿಸಿದ ಸಾರ್ವಜನಿಕ ವ್ಯಾಪ್ತಿಗಳಿಂದ ದೂರು ಆಕ್ಷೇಪಣೆಗಳನ್ನು ಆಹ್ವಾನಿಸಿ ಪರಿಶೀಲಿಸುತ್ತಾರೆ.

1) ಶ್ರೀಯುತ ಪದ್ಮಾಕರ ರಾ. ಕುಲಕರ್ಣಿ, ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು.
2) ಶ್ರೀಯುತ ಹೆಚ್.ಎಸ್. ಬಸವಪ್ರಭು, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು.
3) ಶ್ರೀಯುತ ವಿಶ್ವನಾಥ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು.

ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು
(ಆಡಿಟ್–1) ಡಿ.ವ್ಹಿ.ಓ. ಗುಲಬರ್ಗಾ.

ಪಿ.ಆರ್.1190

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

## ಅಮಲ್ಜಾರಿ ಅರ್ಜಿ ಸಂಖ್ಯೆ:25:2008–09

**ಅರ್ಜಿದಾರರು:**ಶ್ರೀ ಕೆ. ರಮೇಶ್ ಬಿನ್ ಎಂ. ಕಂಬಣ್ಣ, ಸಂತೇಪೇಟೆ, ಶಿರಾ ಟೌನ್.

| **ಡಿಕ್ರಿಹೋಲ್ಡರ್** | | **ತೀರ್ಪುಋಣಿ:** |
|---|---|---|
| ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು, ಜಿಲ್ಲೆ. | **ವಿರುದ್ಧ** | ಎಂ. ಷಡಾಕ್ಷರಯ್ಯ ಬಿನ್ ಡಿ. ಮಲ್ಲಯ್ಯ, ಸಂತೇಪೇಟೆ, ಶಿರಾಟೌನ್, ತುಮಕೂರು ಜಿಲ್ಲೆ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.174142/– ದಾವಾ ಶುಲ್ಕ ರೂ.1420/– ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ, ಸಹಕಾರ ಪಟ್ಟಣ ಬ್ಯಾಂಕುಗಳ ಮಹಾ ಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ25/ 2008–09 ಮೊಬಲಗು ರೂ.183841/–ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ದಿನಾಂಕ:09.06.2009ಕ್ಕೆ ರೂ.195300/– ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪು ಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:09.06.2009 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಕೆ. ರಮೇಶ್ ಬಿನ್ ಎಂ. ಕಂಬಣ್ಣ ಸಂತೇಪೇಟೆ, ಶಿರಾ ಇವರಿಗೆ ಮನೆ ಮತ್ತು ನಿವೇಶನವನ್ನು ರೂ.1,15,000/– (ರೂಪಾಯಿಗಳು ಒಂದು ಲಕ್ಷದ ಹದಿನೈದು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ತೀರ್ಪುಋಣಿದಾರರು ದಿನಾಂಕ:23.10.2009ರಂದು ನೀಡಿರುವ ಪತ್ರವನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸ.ಸಂ.ಸ.ನಿ.33: ಎಬಿಎನ್:ಎಸ್.ಸಿ.:42:2009–10, ದಿನಾಂಕ:30ನೇ ಅಕ್ಟೋಬರ್, 2009**

ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38(6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ಶ್ರೀ ಎಂ. ಷಡಾಕ್ಷರಯ್ಯ ಬಿನ್ ಡಿ. ಮಲ್ಲಯ್ಯ ಸಂತೇಪೇಟೆ, ಶಿರಾ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:09.06.2009 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರ ಶ್ರೀ ಕೆ. ರಮೇಶ್ ಬಿನ್ ಎಂ. ಕಂಬಣ್ಣ, ಸಂತೇಪೇಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀ ಕೆ. ರಮೇಶ ಬಿನ್ ಎಂ. ಕಂಬಣ್ಣ ಸಂತೇಪೇಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಲಾದ ರೂ.115000/– ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತೋ ಆ ಮೊಬಲಗು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಫ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ಎಂ. ಷಡಾಕ್ಷರಯ್ಯ ಬಿನ್ ಡಿ.ಮಲ್ಲಯ್ಯ ಸಂತೇಪೇಟೆ, ಶಿರಾ ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ:**

ಸಂತೇಪೇಟೆ, ಶಿರಾಟೌನ್, ನಿವೇಶನ ಮತ್ತು ಮನೆ ಅಸೆಸ್‌ಮೆಂಟ್ ನಂ.1640/6329/1/5514/1 ವಿಸ್ತೀರ್ಣ:15x44 ಅಡಿಗಳುಳ್ಳ ನಿವೇಶನ ಮತ್ತು ಮನೆ ಇದಕ್ಕೆ ಚೆಕ್ಕುಬಂದಿ:

**ಪೂರ್ವಕ್ಕೆ:** ಮಲ್ಲಿಕಾರ್ಜುನಯ್ಯ ಮತ್ತು ಹನುಮಂತಪ್ಪನವರ ಮನೆ.

**ಪಶ್ಚಿಮಕ್ಕೆ:** 4 ಅಡಿ ಜಂಟಿ ದಾರಿ

**ಉತ್ತರಕ್ಕೆ:** ಎಂ. ವಿಶ್ವನಾಥ್‌ರವರ ಮನೆ.

**ದಕ್ಷಿಣಕ್ಕೆ:** ಈರಣ್ಣನವರ ಮನೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2009ನೇ ಇಸವಿ ಅಕ್ಟೋಬರ್ ತಿಂಗಳ 30 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**
**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**
**ಅಮಲ್ಜಾರಿ ಅರ್ಜಿ ಸಂಖ್ಯೆ:25:2008–09**

**ಉಪಸ್ಥಿತರು:**ಶ್ರೀ ಹೆಚ್.ಡಿ. ಶಿವಣ್ಣ, ಬಿ.ಎಸ್ಸಿ., ಬಿ.ಇಡಿ.
ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಬಿಡ್‌ದಾರರು:** ಶ್ರೀ ಕೆ. ರಮೇಶ್ ಬಿನ್ ಎಂ. ಕಂಬಣ್ಣ
ಸಂತೇಪೇಟೆ, ಶಿರಾ ಟೌನ್.

| **ಡಿಕ್ರಿ ಹೋಲ್ಡರ್** | | **ತೀರ್ಪು ಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು. | **ವಿರುದ್ಧ** | ಎಂ. ಷಡಾಕ್ಷರಯ್ಯ ಬಿನ್ ಡಿ. ಮಲ್ಲಯ್ಯ, ಸಂತೇಪೇಟೆ, ಶಿರಾಟೌನ್, ತುಮಕೂರು ಜಿಲ್ಲೆ. |

ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:11.09.2008 ರಂದು ಪಡೆದ ಡಿಕ್ರಿ ನಂ.ಜೆ.ಆರ್.ಡಿ.: ಯು.ಬಿ.ಎಫ್:1438:2008–09 ರ ಪ್ರಕಾರ ದಿನಾಂಕ:15.12.2008 ರಂದು ಸಿ.ಇ.ಪಿ.ನಂ.25/2008–09 ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪು ಋಣಿದಾರರಾದ ಶ್ರೀ ಎಂ. ಷಡಾಕ್ಷರಯ್ಯ ಬಿನ್ ಡಿ. ಮಲ್ಲಯ್ಯ, ಸಂತೇಪೇಟೆ, ಶಿರಾ ಟೌನ್ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:09.06.2009ರಂದು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀ ಕೆ. ರಮೇಶ್ ಬಿನ್ ಎಂ. ಕಂಬಣ್ಣ, ಸಂತೇಪೇಟೆ, ಶಿರಾ, ತುಮಕೂರು ಜಿಲ್ಲೆ ಇವರು ರೂ.1,15,000/– (ರೂಪಾಯಿಗಳು ಒಂದು ಲಕ್ಷದ ಹದಿನೈದು ಸಾವಿರ ಮಾತ್ರ) ಗಳ ಅತೀ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು

ಬಿಡ್‌ದಾರರಾದ ಶ್ರೀ ಕೆ. ರಮೇಶ್ ಬಿನ್ ಎಂ. ಕಂಬಣ್ಣ, ಸಂತೇಪೇಟೆ, ಶಿರಾ ಟೌನ್ ಇವರ ಹೆಸರಿಗೆ ತೀರ್ಪುಋಣಿದಾರರು ದಿನಾಂಕ:23.10.2009 ರಂದು ನೀಡಿರುವ ಪತ್ರ ಪರಿಶೀಲಿಸಿ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ:**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಸಂತೇಪೇಟೆ, ಶಿರಾ ಟೌನ್, ಶಿರಾ | ಮನೆ+ ನಿವೇಶನ | 1640/ 6329/1 /5514/1 | ಎಂ. ಷಡಾಕ್ಷರಯ್ಯ ಬಿನ್ ಡಿ. ಮಲ್ಲಯ್ಯ ಸಂತೇಪೇಟೆ, ಶಿರಾ ಟೌನ್, ತುಮಕೂರು ಜಿಲ್ಲೆ. | 15x44 ಅಡಿಗಳು | **ಪೂರ್ವಕ್ಕೆ:** ಮಲ್ಲಿಕಾರ್ಜುನಯ್ಯ ಮತ್ತು ಹನುಮಂತಪ್ಪನವರ ಮನೆ. **ಪಶ್ಚಿಮಕ್ಕೆ:** 4 ಅಡಿ ಜಂಟಿ ದಾರಿ **ಉತ್ತರಕ್ಕೆ:** ಎಂ. ವಿಶ್ವನಾಥ್‌ರವರ ಮನೆ. **ದಕ್ಷಿಣಕ್ಕೆ:** ಈರಣ್ಣನವರ ಮನೆ. |

ಮಾರಾಟದ ಮೊತ್ತ ರೂ.1,15,000/-

ಮಾರಾಟದ ದಿನಾಂಕ:09.06.2009

ನಿಗದಿತ ಮುದ್ರಾಂಕ ಶುಲ್ಕ ರೂ.7,820/-

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2009ನೇ ಇಸವಿ ಅಕ್ಟೋಬರ್ ಮಾಹೆ 30 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.1191 ಮಧುಗಿರಿ ಉಪವಿಭಾಗ, ಮಧುಗಿರಿ.

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ/91/ಡಿಟಿಸಿಆರ್/2008-09, ದಿನಾಂಕ:31ನೇ ಜುಲೈ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ, ಬಂಟ್ವಾಳ.

**ಆರೋಪಿಗಳು:**

1) ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.

2) ಕಮಲಾಕ್ಷ, ಬಿನ್ ಬಾಬು ಪೂಜಾರಿ (28 ವ), ಕಮ್ರಾಜೆ ಮನೆ, ತೆಂಕಬೆಳ್ಳೂರು ಗ್ರಾಮ, ಬಂಟ್ವಾಳ ತಾಲ್ಲೂಕು.

**ವಾಹನ ಮಾಲೀಕರು:**

ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:25.09.2008 ರಂದು ಅಪರಾಹ್ನ 2-00 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಬಂಟ್ವಾಳ ತಾಲ್ಲೂಕು ಕಳ್ಳಿಗೆ ಗ್ರಾಮದ ಪಚ್ಚಿನಡ್ಕ ಎಂಬಲ್ಲಿ ಬಿ.ಸಿ.ರೋಡ್-ಪೊಳಲಿಗೆ ಹೋಗುವ ರಸ್ತೆಯಲ್ಲಿ ಒಂದು ಆಟೋರಿಕ್ಷಾ ಸಂಖ್ಯೆ: ಕೆಎ-19-ಎ-2027 ಬರುತ್ತಿರುವುದನ್ನು ಕಂಡು ನಿಲ್ಲಿಸಲಾಯಿತು. ಸದರಿ ಆಟೋರಿಕ್ಷಾದಲ್ಲಿ ಹಿಂದಿನ ಸೀಟಿನಲ್ಲಿ ಇನ್ನೊಬ್ಬ ವ್ಯಕ್ತಿಯು ಕುಳಿತ್ತಿದ್ದು, ಅವನ ಪಕ್ಕದಲ್ಲಿ ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ಸದರಿ ಆಟೋರಿಕ್ಷಾವನ್ನು ಪರಿಶೀಲಿಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದೇ ಇರುವುದರಿಂದ, ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ ಸದರಿ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, ಸದರಿ ವಾಹನದ ನೋಂದಣಿ ಸಂಖ್ಯೆ: ಕೆಎ-19-ಎ-2027 ಆಗಿದ್ದು, ರಿಕ್ಷಾದ ಹಿಂಬದಿಯ ಸೀಟನ್ನು ಶೋಧಿಸಿದಾಗ, ಸೀಟಿನ ಮೇಲೆ ಕುಳಿತಿದ್ದ ವ್ಯಕ್ತಿಯ ಪಕ್ಕದಲ್ಲಿ 3 ರಟ್ಟಿನ ಪೆಟ್ಟಿಗೆಗಳಿದ್ದು, ಅವುಗಳಲ್ಲಿ ಹೈವೆ ನಂ.1 ವಿಸ್ಕಿ ಎಂದು ಲೇಬಲ್ ಅಂಟಿಸಿರುವ 180 ಎಂ.ಎಲ್.ನ 48 ಸೀಸೆಗಳಲ್ಲಿ ಮದ್ಯ ತುಂಬಿದ್ದು ಮತ್ತು ಇನ್ನೊಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 48 ಮೈಸೂರು ಲ್ಯಾನ್ಸರ್ ವಿಸ್ಕಿ

ತುಂಬಿದ ಸೀಸೆಗಳಿರುವುದು ಪತ್ತೆಯಾದವು. ಸೀಟಿನ ಹಿಂಬದಿಯನ್ನು ಶೋಧಿಸಿದಾಗ ಅದರಲ್ಲಿಯೂ ಸಹಾ ಎರಡು ರಟ್ಟಿನ ಪೆಟ್ಟಿಗೆಗಳಿದ್ದು, ಒಂದನೇ ರಟ್ಟಿನ ಪೆಟ್ಟಿಗೆಯಲ್ಲಿ 330 ಎಂ.ಎಲ್.ನ 24 ಸೀಸೆಗಳಲ್ಲಿರುವ ಕಿಂಗ್‌ಫಿಶರ್ ಸ್ಟ್ರಾಂಗ್ ಪ್ರೀಮಿಯರ್ ಬೀರ್ ಮತ್ತು ಇನ್ನೊಂದು ರಟ್ಟಿನ ಪೆಟ್ಟಿಗೆಯಲ್ಲಿ 650 ಎಂ.ಎಲ್.ನ 12 ಸೀಸೆಗಳಿರುವ ಕಿಂಗ್‌ಫಿಶರ್ ಸ್ಟ್ರಾಂಗ್ ಪ್ರೀಮಿಯರ್ ಬೀರ್ ಇರುವುದು ಕಂಡು ಬಂತು. ಸದರಿ ಮದ್ಯ ಹಾಗೂ ಬೀರ್‌ನ್ನು ಸಾಗಾಟ ಮಾಡಲು ರಹದಾರಿ ಪತ್ರಗಳು ಇದೆಯೇ ಎಂದು ಕೇಳಲಾಗಿ, ಸಾಗಾಣಿಕೆ ಬಗ್ಗೆ ಯಾವುದೇ ದಾಖಲಾತಿಗಳು ಅಥವಾ ರಹದಾರಿ ಪತ್ರವಿಲ್ಲವೆಂದು ತಿಳಿಸಿದರು. ನಂತರ ಚಾಲಕ ಹಾಗೂ ಹಿಂಬದಿಯಲ್ಲಿ ಕುಳಿತಿದ್ದ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಡ್ರೈವರ್‌ನ ಹೆಸರು ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28 ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು ಮತ್ತು ಹಿಂಬದಿಯಲ್ಲಿ ಕುಳಿತಿದ್ದ ವ್ಯಕ್ತಿಯ ಹೆಸರು ಕಮಲಾಕ್ಷ ಬಿನ್ ಬಾಬು ಪೂಜಾರಿ (28 ವ), ಕಮ್ರಾಜೆ ಮನೆ, ತೆಂಕಬೆಳ್ಳೂರು ಗ್ರಾಮ, ಬಂಟ್ವಾಳ ತಾಲ್ಲೂಕು ಎಂದು ತಿಳಿಸಿದರು. ಸದರಿ ಆಟೋರಿಕ್ಷಾದಲ್ಲಿ ಸಾಗಾಟ ಮಾಡುತ್ತಿದ್ದ ಮದ್ಯ ಹಾಗೂ ಬೀರ್ ತನ್ನದೆಂದು ಲ್ಯಾನ್ಸಿ ರೋಡ್ರಿಗಸ್ ಒಪ್ಪಿಕೊಂಡಿರುತ್ತಾರೆ. ಆದುದರಿಂದ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಅಪರಾಧವಾಗಿರುವ ಕಾರಣ ಆಟೋರಿಕ್ಷಾ ಮತ್ತು ದೊರೆತ ಮದ್ಯ ಹಾಗೂ ಬೀರ್‌ನ್ನು ಜಪ್ತು ಮಾಡಿ ಸರ್ಕಾರದ ವಶಕ್ಕೆ ತೆಗೆದುಕೊಂಡು ಮದ್ಯ ಹಾಗೂ ಬೀರ್‌ನಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ಸೀಸೆಗಳನ್ನು ತೆಗೆದು ಬಟ್ಟೆದಾರ ಕಟ್ಟಿ ಅರಗಿನಿಂದ ಸೀಲ್ ಮಾಡಿ ಸ್ಥಳದಲ್ಲಿಯೇ ಮಾದರಿ ಸೀಲನ್ನು ತಯಾರಿಸಿ ಆರೋಪಿಗಳನ್ನು ದಸ್ತಗಿರಿ ಮಾಡಿ ಮಹಜರನ್ನು ಬರೆದು ಹಾಗೂ ಮಹಜರಿನಲ್ಲಿ ಸ್ಥಳ ಚೆಕ್ ಬಂದಿಯನ್ನು ನಮೂದಿಸಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಸಾಗಾಟಕ್ಕೆ ಬಳಸಿದ ಮದ್ಯ ಮತ್ತು ಆಟೋರಿಕ್ಷಾವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ:15/2008–09 ದಿನಾಂಕ:25.09.2008 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/34/2008–09 ದಿನಾಂಕ:21.02.2009ರ ವರದಿಯಲ್ಲಿ ವಶಪಡಿಸಿಕೊಂಡಿರುವ ಮದ್ಯದ ಹಾಗೂ ಬೀರ್‌ನ ಸೀಸೆಗಳಿಂದ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ: ಇ–539–28 ದಿನಾಂಕ:10.12.2008ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.42 ಮತ್ತು ಬೀರ್‌ನ ಮದ್ಯಸಾರ ಪ್ರಮಾಣ ಶೇ.06–5 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2027ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಲ್ಲಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಸಂಪರ್ಕಿಸಿ, ಅವರು ದಿನಾಂಕ:20.10.2008ರಂದು ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಬಿ ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ಸದರಿ ವಾಹನವು ಬಜಾಜ್ ಆಟೋರಿಕ್ಷಾವಾಗಿದ್ದು, ಇದರ ನೋಂದಣಿ ಮಾಲೀಕ ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28 ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು ಎಂದು, ಇದರ ಚಾಸೀಸ್ ನಂ.24 ಎಫ್‌ಬಿಇಎಫ್17351 ಮತ್ತು ಇಂಜೀನ್ ನಂ.24ಎಂಬಿಇಎಫ್39059 ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಆದರೆ ಯಾವುದೇ ವ್ಯಕ್ತಿಯು ಇದುವರೆಗೂ ಸದರಿ ವಾಹನವನ್ನು ತನ್ನದೆಂದು ತಿಳಿಸಿ ಅವರ ಕಛೇರಿಗೆ ಸಂಪರ್ಕಿಸಿರುವುದಿಲ್ಲವೆಂದು ಹಾಗೂ ಸದರಿ ವಾಹನದ ಮಾಲೀಕರ ಅಕ್ರಮ ದಂಧೆಯಲ್ಲಿ ಭಾಗಿಯಾಗಿರುವುದು ಸ್ಪಷ್ಟವಾಗಿರುವುದರಿಂದ, ವಶಪಡಿಸಿಕೊಂಡ ಮದ್ಯ, ಬೀರ್ ಹಾಗೂ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯ ಹಾಗೂ ಬೀರ್‌ನ್ನು ನಾಶಪಡಿಸಲು ಮತ್ತು ಆಟೋರಿಕ್ಷಾವನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28 ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು ಇವರು ಈ ಪ್ರಾಧಿಕಾರಕ್ಕೆ ದಿನಾಂಕ:20.03.2009 ರಂದು ಅರ್ಜಿ ಸಲ್ಲಿಸಿ, ತಾನು ಮದ್ಯವನ್ನು ಸಾಗಾಟ ಮಾಡಿರುವುದು ತನಗೆ ಗೊತ್ತಿಲ್ಲವೆಂದು, ತಾನು ಮಾಡಿದ ತಪ್ಪನ್ನು ಮನ್ನಿಸಿ ತನ್ನ ವಾಹನವನ್ನು ಬಿಡುಗಡೆಗೊಳಿಸಬೇಕೆಂದು ತನ್ನ ಅರ್ಜಿಯಲ್ಲಿ ವಿನಂತಿಸಿರುತ್ತಾರೆ. ಆದರೆ ಸಾಗಾಟಕ್ಕೆ ಬಳಸಿದ ಬಗ್ಗೆ ಯಾವುದೇ ಬಿಲ್ಲು ಅಥವಾ ರಹದಾರಿಯನ್ನು ನೀಡಿರುವುದಿಲ್ಲ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/91/ಡಿಟಿಸಿಆರ್/2008–09 ದಿನಾಂಕ:30.05.2009 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾವನ್ನು ಹೊರತುಪಡಿಸಿ, ಉಳಿದ 17–280 ಲೀಟರ್ ಮದ್ಯ ಮತ್ತು 15–720 ಲೀಟರ್ ಬೀರ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯ ಹಾಗೂ ಬೀರ್‌ನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಇಎಸ್/2007 ದಿನಾಂಕ:13.07.2007 ರಂತೆ ಮಾರಾಟ ಮಾಡಲು ನಿರ್ದೇಶಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸಲು ಆದೇಶಿಸಿರುವುದರಿಂದ, ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ

43ಎ(3) ರನ್ವಯ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ: ಇಸಿಸಿ/73/ಸಿಆರ್ಎಂ/2004 ದಿನಾಂಕ:12.09.2005ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ಮದ್ಯ ಹಾಗೂ ಬೀರ್‌ನ್ನು ನಾಶಪಡಿಸಲಾಗಿದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28 ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು ಮತ್ತು ಕಮಲಾಕ್ಷ ಬಿನ್ ಬಾಬು ಪೂಜಾರಿ (28 ವ), ಕಮ್ರಾಜೆ ಮನೆ, ತೆಂಕಬೆಳ್ಳೂರು ಗ್ರಾಮ, ಬಂಟ್ವಾಳ ತಾಲ್ಲೂಕು ಇವರುಗಳಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ಹಾಗೂ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಮುಖಾಂತರ ದಿನಾಂಕ:30.05.2009ರಂದು ನೀಡಲಾಗಿದ್ದು, ವಾಹನ ಮಾಲೀಕರಿಗೆ ನೀಡಲಾಗಿದ್ದ ನೋಟೀಸು ಜಾರಿಯಾಗಿದ್ದು ಹಾಗೂ ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ ಇವರು ಖುದ್ದಾಗಿ ದಿನಾಂಕ:24.06.2009 ರಂದು ಆಟೋರಿಕ್ಷಾದ ಮಾಲೀಕರಾದ ಲ್ಯಾನ್ಸಿ ರೋಡ್ರಿಗಸ್ ಇವರಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿರುತ್ತಾರೆ. ಆದರೆ ಇದುವರೆಗೂ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲಿ ಹಾಗೂ ದಸ್ತಗಿರಿಯಾದ ಆರೋಪಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನದ ಬಿಡುಗಡೆಗಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿನಾಂಕ:25.09.2008ರಂದು ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2027 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಹಾಗೂ ಬೀರ್ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಹಾಗೂ ಬೀರ್ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ:1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಮಹಜರು ಸಾಕ್ಷಿ ಹಾಗೂ ತನಿಖಾಧಿಕಾರಿಯಾದ ಶ್ರೀ ರತ್ನಾಕರ ರೈ. ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ ಇವರು ದಿನಾಂಕ:22.07.2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿನಾಂಕ:06.02.2005 ರಿಂದ ಒಂದಿನವರೆಗೆ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿನಾಂಕ:25.09.2008ರಂದು ತಾನು ತನ್ನ ಸಿಬ್ಬಂದಿಯವರೊಂದಿಗೆ ಹಾಗೂ ಅಬಕಾರಿ ನಿರೀಕ್ಷಕರೊಂದಿಗೆ ಬಂಟ್ವಾಳ ತಾಲ್ಲೂಕಿನ ಕಳ್ಳಿಗೆ ಗ್ರಾಮದ ಪಚ್ಚಿನಡ್ಕ ಪ್ರದೇಶದಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಬಿ.ಸಿ. ರೋಡ್ ಕಡೆಯಿಂದ ಪೊಳಲಿ ಕಡೆಗೆ ಹೋಗುತ್ತಿದ್ದ ಆಟೋರಿಕ್ಷಾವನ್ನು ಕಂಡು ಅನುಮಾನದ ಮೇರೆಗೆ ಆಟೋರಿಕ್ಷಾವನ್ನು ತಪಾಸಣೆಗೆಂದು ನಿಲ್ಲಿಸಲು ಸೂಚಿಸಿದಾಗ, ಆಟೋರಿಕ್ಷಾ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿಯು ಇರುವುದು ಕಂಡು ಬಂದಿದ್ದು, ಆಟೋರಿಕ್ಷಾವನ್ನು ಶೋಧಿಸುವ ಸಲುವಾಗಿ ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರಂಟ್ ಪಡೆಯಲು ಸಮಯಾವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 54 ರಂತೆ ಕಾರಣಗಳನ್ನು ನಮೂದಿಸಿ ಶೋಧನಾ ಸಮುಚಿತ ಆಧಾರವನ್ನು ತಯಾರಿಸಿ ರಿಕ್ಷಾದ ಶೋಧನೆ ನಡೆಸಲಾಯಿತು. ಹಿಂಬದಿಯ ಸೀಟಿನಲ್ಲಿ ಕುಳಿತ್ತಿದ್ದ ವ್ಯಕ್ತಿಯ ಪಕ್ಕದಲ್ಲಿ ಎರಡು ರಟ್ಟಿನ ಪೆಟ್ಟಿಗೆಗಳಿದ್ದು, ಒಂದನೇ ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 48 ಸೀಸೆಗಳಿರುವ ಹೈವೆ ನಂ.1 ವಿಸ್ಕಿ ಮತ್ತು ಇನ್ನೊಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 48 ಸೀಸೆಗಳಿರುವ ಮೈಸೂರು ಲ್ಯಾನ್ಸರ್ ವಿಸ್ಕಿ ಪತ್ತೆಯಾದವು. ಸೀಟಿನ ಹಿಂಬದಿಯನ್ನು ಶೋಧಿಸಿದಾಗ, ಅದರಲ್ಲಿ 2 ರಟ್ಟಿನ ಪೆಟ್ಟಿಗೆಗಳಿದ್ದು, ಒಂದನೇ ರಟ್ಟಿನ ಪೆಟ್ಟಿಗೆಯಲ್ಲಿ 330 ಎಂ.ಎಲ್.ನ 24 ಸೀಸೆಗಳಿರುವ ಕಿಂಗ್‌ಫಿಶರ್ ಸ್ಟ್ರಾಂಗ್ ಬೀರ್ ಮತ್ತು ಇನ್ನೊಂದು ಪೆಟ್ಟಿಗೆಯಲ್ಲಿ 650 ಎಂ.ಎಲ್.ನ 12 ಸೀಸೆಗಳಂತೆ ಕಿಂಗ್‌ಫಿಶರ್ ಸ್ಟ್ರಾಂಗ್ ಪ್ರೀಮಿಯರ್ ಬೀರ್ ಇರುವುದು ಕಂಡು ಬಂತು. ಸದರಿ ಮದ್ಯ ಹಾಗೂ ಬೀರ್‌ನ ಬಗ್ಗೆ ವಿಚಾರಿಸಿದಾಗ, ಅವುಗಳು ತನ್ನದೆಂದು ವಾಹನದ ಚಾಲಕನಾದ ಲ್ಯಾನ್ಸಿ ರೋಡ್ರಿಗಸ್ ಒಪ್ಪಿಕೊಂಡಿರುತ್ತಾನೆ. ಸದರಿ ಮದ್ಯ ಹಾಗೂ ಬೀರ್‌ನ್ನು ಸಾಗಾಣಿಕೆ ಮಾಡಲು ದಾಖಲಾತಿಗಳು ಹಾಗೂ ರಹದಾರಿ ಪತ್ರ ಇದೆಯೇ ಎಂದು ವಿಚಾರಿಸಿದಾಗ,

ಆತನಲ್ಲಿ ಯಾವುದೂ ಇಲ್ಲವೆಂದು ತಿಳಿಸಿರುತ್ತಾನೆ. ಆತನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಲ್ಯಾನ್ಸಿ ರೋಡ್ರಿಗಸ್, ಬಿನ್ ಫೆಡ್ರಿಕ್ ರೋಡ್ರಿಗಸ್ (28 ವ), ತೊಡಂಬಿಲ ಮನೆ, ಕಳ್ಳಿಗೆ ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು ಹಾಗೂ ಇನ್ನೊಬ್ಬ ವ್ಯಕ್ತಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಕಮಲಾಕ್ಷ ಬಿನ್ ಬಾಬು ಪೂಜಾರಿ (28 ವ), ಕಮ್ರಾಜೆ ಮನೆ, ತೆಂಕಬೆಳ್ಳೂರು ಗ್ರಾಮ, ಬಂಟ್ವಾಳ ತಾಲ್ಲೂಕು ಎಂದು ತಿಳಿಸಿದನು. ಇವರಿಬ್ಬರೂ ಸೇರಿಕೊಂಡು ಅಕ್ರಮವಾಗಿ ಮದ್ಯ ಹಾಗೂ ಬೀರ್‌ನ್ನು ಸಾಗಾಟ ಮಾಡುತ್ತಿರುವುದನ್ನು ಒಪ್ಪಿಕೊಂಡ ಮೇರೆಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34, 38(ಎ) ರಡಿಯಲ್ಲಿ ದಸ್ತಗಿರಿ ಮಾಡುವ ಬಗ್ಗೆ ಸದರಿಯವರಿಗೆ ತಿಳಿಸಿ, ಸ್ಥಳದಲ್ಲಿಯೇ ದಸ್ತಗಿರಿ ಮಾಡಲಾಯಿತು. ಜಪ್ತಾದ ಮದ್ಯ ಹಾಗೂ ಬೀರ್‌ನ ರಟ್ಟಿನ ಪೆಟ್ಟಿಗೆಗಳಿಂದ ಮಾದರಿ ಸೀಸೆಗಳನ್ನು ಪ್ರತ್ಯೇಕಿಸಿ, ಅವುಗಳ ಮುಚ್ಚಳಕ್ಕೆ ಬಟ್ಟೆಯನ್ನು ಸುತ್ತಿ ದಾರದಿಂದ ಕಟ್ಟಿ ಅರಗಿನಿಂದ ಸೀಲ್ ಮಾಡಿ ಬಾಟಲ್‌ಗಳಿಗೆ ಆರೋಪಿಯ ಸಹಿ ಇರುವ ಗುರುತಿನ ಚೀಟಿ ಅಂಟಿಸಿ ಪ್ರತ್ಯೇಕಿಸಿ ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದಿರಿಸಲಾಯಿತು. ಸ್ಥಳದಲ್ಲಿಯೇ ಮಾದರಿ ಮೊಹರನ್ನು ತಯಾರಿಸಲಾಯಿತು. ಎಲ್ಲಾ ಮದ್ಯ ಹಾಗೂ ಬೀರ್‌ನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡು ಆಟೋರಿಕ್ಷದ ನೋಂದಣಿ ಸಂಖ್ಯೆಯನ್ನು ಪರಿಶೀಲಿಸಲಾಗಿ, ಇದರ ನೋಂದಣಿ ಸಂಖ್ಯೆ:ಕೆಎ–19–ಎ–2027 ಆಗಿದ್ದು, ಮಹಜರನ್ನು ಮತ್ತು ಸೊತ್ತುಗಳ ಪಟ್ಟಿಯನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಮಹಜರನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ನಂತರ ಆರೋಪಿಗಳನ್ನು ಹಾಗೂ ಸೊತ್ತುಗಳೊಂದಿಗೆ ಕಛೇರಿಗೆ ತಂದು ಕಛೇರಿಯಲ್ಲಿ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಅದನ್ನು ನಿಶಾನೆ ಪಿ–2 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2ಎ ಎಂದು, ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–3 ಎಂದು, ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನಿಶಾನೆ ಪಿ–4 ಎಂದು ಮತ್ತು ತನಿಖಾ ವರದಿಯನ್ನು ನಿಶಾನೆ ಪಿ–5 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–5ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ತಕ್ಷೀರಿನ ತನಿಖೆ ನಡೆಸಿ, ತನಿಖೆಯನ್ನು ಪೂರ್ಣಗೊಳಿಸಿ ಆರೋಪಿತರ ವಿರುದ್ಧ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ಮತ್ತು 14 ರಂತೆ ಅಪರಾಧವೆಸಗಿರುವುದು ಕಂಡು ಬಂದಿದ್ದು, ಕಲಂ 32, 34, 38(ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಗಳ ವಿರುದ್ಧ ಅಂತಿಮ ದೋಷಾರೋಪಣಾ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ದಿನಾಂಕ:28.04.2009 ರಂದು ಸಲ್ಲಿಸಿರುತ್ತೇನೆ. ಈ ಬಗ್ಗೆ ಮಾನ್ಯ ನ್ಯಾಯಾಲಯವು ಸಿ.ಸಿ.ಸಂಖ್ಯೆ:312/2009ರಂತೆ ನೀಡಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಪರ ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:25.09.2008 ರಂದು ಜಪ್ತುಪಡಿಸಿಕೊಂಡಿರುವ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2027 ರಲ್ಲಿ ಅಕ್ರಮವಾಗಿ 17–280 ಲೀಟರ್ ಮದ್ಯ ಮತ್ತು 15–720 ಲೀಟರ್ ಬೀರ್‌ನ್ನು ಅಕ್ರಮ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ, ಬಂಟ್ವಾಳ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ 17–280 ಲೀಟರ್ ಮದ್ಯ ಮತ್ತು 15–720 ಲೀಟರ್ ಬೀರ್‌ನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯ ಹಾಗೂ ಬೀರ್ ಎಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2027 ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಬಂಟ್ವಾಳ ವಲಯ ಕಛೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಹಾಗೂ ಆರೋಪಿಯು ಕೂಡಾ ವಾಹನವು

ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಇಂತಹ ಅಕ್ರಮ ಮದ್ಯ ಹಾಗೂ ಬೀರ್ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯ ಹಾಗೂ ಬೀರ್‌ನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳಿ ನೋಟೀಸು ಮತ್ತು ಹಾಜರಾತಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಅದು ಸ್ವೀಕೃತಿಯಾಗಿದ್ದರು, ಅವರು ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ತಕ್ಷೀರು ನಡೆದ ಸಂದರ್ಭದಲ್ಲಿ ದಸ್ತಗಿರಿಯಾದ ಆರೋಪಿ ವಾಹನದ ಮಾಲೀಕರಾಗಿದ್ದು, ವಾಹನ ಮಾಲೀಕರೇ ಸ್ವತಃ ತನ್ನ ಆಟೋರಿಕ್ಷಾದಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯ ಹಾಗೂ ಬೀರ್‌ನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವು ಈಗಾಗಲೇ ಒಂದು ವರ್ಷ ಕಳೆದರೂ ಅದರ ಮಾಲೀಕತ್ವದ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಸರ್ಕಾರದ ಆರ್ಥಿಕ ಹಿತದೃಷ್ಟಿಯಿಂದ ಅಕ್ರಮ ಮದ್ಯ ಹಾಗೂ ಬೀರ್ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2027 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/91/ಡಿಟಿಸಿಆರ್/2008–09, ದಿನಾಂಕ:31ನೇ ಜುಲೈ, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ, ಬಂಟ್ವಾಳ ಇವರ ತಕ್ಷೀರು ಸಂಖ್ಯೆ: 15/2008–09, ದಿನಾಂಕ:25.09.2008ರಲ್ಲಿ ಜಪ್ತುಪಡಿಸಿರುವ ಆಟೋರಿಕ್ಷಾ ಸಂಖ್ಯೆ: ಕೆಎ–19–ಎ–2027 ನ್ನು ನಿಯಮ 43ಎ(2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:31.07.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ–1:** ಶ್ರೀ ರತ್ನಾಕರ ರೈ, ಅಬಕಾರಿ ಉಪ ನಿರೀಕ್ಷಕರು (ನಂ.1), ಬಂಟ್ವಾಳ ವಲಯ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1: ಮಹಜರು ಪ್ರತಿ
ನಿಶಾನೆ ಪಿ–1ಎ: ಮಹಜರಿನಲ್ಲಿರುವ ಫಿರ್ಯಾದುದಾರರ ಸಹಿ
ನಿಶಾನೆ ಪಿ–2: ಪ್ರಥಮ ಮಾಹಿತಿ ವರದಿ ಪ್ರತಿ
ನಿಶಾನೆ ಪಿ–2ಎ: ಪ್ರಥಮ ಮಾಹಿತಿ ವರದಿಯಲ್ಲಿರುವ ಫಿರ್ಯಾದುದಾರರ ಸಹಿ.
ನಿಶಾನೆ ಪಿ–3: ಬಿ ಅಬ್‌ಸ್ಟ್ರಾಕ್ಟ್ ವರದಿ.
ನಿಶಾನೆ ಪಿ–4: ರಾಸಾಯನಿಕ ವಿಶ್ಲೇಷಣಾ ವರದಿ.
ನಿಶಾನೆ ಪಿ–5: ತನಿಖಾ ವರದಿ.
ನಿಶಾನೆ ಪಿ–5ಎ: ತನಿಖಾ ವರದಿಯಲ್ಲಿರುವ ಫಿರ್ಯಾದುದಾರರ ಸಹಿ.

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.**

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು**

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ
ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.934

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ: ಡಿಟಿಸಿಆರ್/386/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು:** | | **ಆರೋಪಿಗಳು:** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ನಜರ್‌ಬಾದ್ ಪೊಲೀಸ್ ಠಾಣೆ, ಮೈಸೂರು. | **ವಿರುದ್ಧ** | ಪ್ಯಾಟ್ರಿಕ್ ಮಾರ್ಕ್ ಅಂಥೋಣಿ ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13.12.2008ರಂದು ರಾತ್ರಿ 2–15 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಇವರು ಮೈಸೂರು ನಗರದ ವಿದ್ಯಾನಗರದ ಕಾವೇರಿ ಮುಖ್ಯ ರಸ್ತೆಯಲ್ಲಿ ಅಕ್ರಮ ಮದ್ಯ ತಯಾರಿಕೆಗೆ ಬಳಸುವ ಸಾಮಗ್ರಿಗಳು, 35 ಲೀ. ಸ್ಪಿರಿಟ್, 4 ಕ್ಯಾನ್ ಮತ್ತು 1 ಡ್ರಂ ರೆಡಿಮಿಕ್ಸ್, ಲೇಬಲ್, ಕ್ಯಾಪ್‌ಗಳು, ಸ್ಟಿಕರ್ ಮತ್ತು ಖಾಲಿ ಬಾಟಲ್‌ಗಳನ್ನು ಲಲಿತಾ ಎಂಬುವವರ ಮನೆಯಿಂದ ವಶಪಡಿಸಿಕೊಳ್ಳಲಾಯಿತು. ಆರೋಪಿ ಪ್ಯಾಟ್ರಿಕ್ ಮಾರ್ಕ್ ಅಂಥೋಣಿ ಇವರನ್ನು ದಸಗಿರಿ ಮಾಡಲಾಗಿದ್ದು, ಫಾಜಿಲ್ ಮತ್ತು ಬಾಬು ಎಂಬುವವರು ಕತ್ತಲಲ್ಲಿ ತಲೆ ಮರೆಸಿಕೊಂಡಿದ್ದು, ಮೇಲ್ಕಂಡ ಮದ್ಯ ತಯಾರಿಕೆಯಲ್ಲಿ ಉಪಯೋಗಿಸುತ್ತಿದ್ದ ಸಾಮಗ್ರಿಗಳು ಮತ್ತು ಮದ್ಯ ಸಾಗಾಣಿಕೆಗೆ ಉಪಯೋಗಿಸುತ್ತಿದ್ದ, ಕೆಎ–19–/ಎಬಿ–2354 ನೋಂದಣಿ ಸಂಖ್ಯೆಯ ಟಾಟಾ ಇಂಡಿಕಾ ಕಾರ್ ಮತ್ತು ಕೆಎ–09/ಇಎಚ್–5743 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್ ವಾಹನಗಳನ್ನು ಮಹಜರ್ ಮೂಲಕ ಅಮಾನತುಪಡಿಸಿಕೊಂಡು ಆರೋಪಿ, ವಾಹನ ಮತ್ತು ಮಾದಕ ದ್ರವ್ಯಗಳನ್ನು ನಜರ್‌ಬಾದ್ ಪೊಲೀಸ್ ಠಾಣೆಗೆ ಹಾಜರುಪಡಿಸಿರುತ್ತಾರೆ. ಅದರಂತೆ ನಜರ್‌ಬಾದ್ ಠಾಣೆಯ ಆರಕ್ಷಕ ಉಪ ನಿರೀಕ್ಷಕರು ಪ್ರಕರಣ ಸಂಖ್ಯೆ:330/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34, 38(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ದಿನಾಂಕ:31.01.2009ರಂದು ಮೈಸೂರು ವಲಯ ಸಂ–1ರ ಅಬಕಾರಿ ನಿರೀಕ್ಷಕರಿಗೆ ವಾಹನ ಮತ್ತು ಮದ್ಯವನ್ನು ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವವುಳ್ಳ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರಿಗೆ ದಿನಾಂಕ:12.02.2009ರಂದು ಬಿ ವಹಿಯ ಪ್ರತಿಯನ್ನು ಕಳುಹಿಸಲು ಕೋರಿ ಪತ್ರ ಬರೆಯಲಾಗಿದ್ದು, ಸದರಿಯವರು ವಾಹನದ ಸಂಖ್ಯೆ ನೋಂದಣಿಯಾಗಿರುವುದು ಕಂಡುಬಂದಿಲ್ಲವೆಂದು ತಿಳಿಸಿರುತ್ತಾರೆ ಮತ್ತು ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಆರೋಪಿತರಾಗಲೀ/ ವಾಹನದ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ/ ಹೊಣೆಗಾರಿಕೆಯನ್ನು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲಿಯೇ ನಡೆದಿದೆ ಎಂಬುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (06) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/386/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಜರ್‌ಬಾದ್ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:330/2008, ದಿನಾಂಕ:13.12.2008ರಂದು ವಶಪಡಿಸಿಕೊಂಡ ಕೆಎ–19–/ಎಬಿ–2354 ನೋಂದಣಿ ಸಂಖ್ಯೆಯ ಟಾಟಾ ಇಂಡಿಕಾ ಕಾರ್ ಮತ್ತು ಕೆಎ–09/ಇಎಚ್–5743 ನೋಂದಣಿ ಸಂಖ್ಯೆಯ ಬಜಾಜ್ ಡಿಸ್ಕವರ್ ವಾಹನಗಳನ್ನು ಮತ್ತು 35 ಲೀ. ಸ್ಪಿರಿಟ್, 4 ಕ್ಯಾನ್ ಮತ್ತು 1 ಡ್ರಂ ರೆಡಿಮಿಕ್ಸ್, ಲೇಬಲ್, ಕ್ಯಾಪ್‌ಗಳು, ಸ್ಟಿಕರ್ ಮತ್ತು ಖಾಲಿ ಬಾಟಲ್‌ಗಳನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.950

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/ 34/ 2008-09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಲಷ್ಕರ್ ಪೊಲೀಸ್ ಠಾಣೆ, ಮೈಸೂರು. | **ವಿರುದ್ಧ** | ಮಾದೇಶ್ ಬಿನ್ ಮಂಚಯ್ಯ<br>ರಾಜೇಶ್ ಬಿನ್ ಚೌಡಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.07.2008ರಂದು ಸಂಜೆ 6.00 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಇವರು ಮೈಸೂರು ನಗರ, ಆರ್.ಆರ್. ಹೋಟೆಲಿನ ಹತ್ತಿರ ಕೆಎಲ್-11/8548 ನೋಂದಣಿ ಸಂಖ್ಯೆಯ ಆಟೋ ವಾಹನದಲ್ಲಿ ಅಕ್ರಮವಾಗಿ 8.100 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಪಡಿಸಿ, ಲಷ್ಕರ್ ಪೊಲೀಸ್ ಠಾಣೆಗೆ ಹಾಜರುಪಡಿಸಿರುತ್ತಾರೆ. ಅದರಂತೆ ಲಷ್ಕರ್ ಠಾಣೆಯ ಆರಕ್ಷಕ ನಿರೀಕ್ಷಕರು ಪ್ರಕರಣ ಸಂಖ್ಯೆ: 112/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34, 38(ಎ), 43ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿಗಳಾದ ಮಾದೇಶ್ ಮತ್ತು ರಾಜೇಶ್ ಇವರುಗಳನ್ನು ದಸ್ತಗಿರಿ ಮಾಡಿ, ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುವುದಾಗಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ದಿನಾಂಕ:22.07.2008ರಂದು ಮೈಸೂರು ವಲಯ ಸಂಖ್ಯೆ-1ರ ಅಬಕಾರಿ ನಿರೀಕ್ಷಕರಿಗೆ ವಾಹನ ಮತ್ತು ಮದ್ಯವನ್ನು ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವವುಳ್ಳ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತಿರುವನಂತಪುರಂ, ಕೇರಳಾ ರಾಜ್ಯ ಇವರಿಗೆ ದಿನಾಂಕ:02.09.2008ರಂದು ಬಿ ವಹಿಯ ಪ್ರತಿಯನ್ನು ಕಳುಹಿಸಲು ಕೋರಿ ಪತ್ರ ಬರೆಯಲಾಗಿತ್ತು. ಸದರಿಯವರಿಂದ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಆರೋಪಿತರಾಗಲೀ/ ವಾಹನದ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ/ ಹೊಣೆಗಾರಿಕೆಯನ್ನು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲಿಯೇ ನಡೆದಿದೆ ಎಂಬುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/34/2008-09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಲಷ್ಕರ್ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:112/2008, ದಿನಾಂಕ:10.07.2008ರಂದು ವಶಪಡಿಸಿಕೊಂಡ ಕೆಎಲ್-11-/8545 ನೋಂದಣಿ ಸಂಖ್ಯೆಯ ಆಟೋ ಮತ್ತು 8.100 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.873

## ನಗರಾಭಿವೃದ್ಧಿ ಇಲಾಖೆ

## ಅಧಿಸೂಚನೆ

**ಸಂಖ್ಯೆ: ನಅಇ:825:ಮೈಅಪ್ರಾ:2009, ಬೆಂಗಳೂರು, ದಿನಾಂಕ:17ನೇ ನವೆಂಬರ್, 2009**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 19(1) ಮತ್ತು ಕರ್ನಾಟಕ ಭೂಸ್ವಾಧೀನ ಕಾಯ್ದೆ 1894ರ ಕಲಂ 48(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987ರ ಕಲಂ 19(1) ಮತ್ತು 2ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅನುಸೂಚಿಯ ಅಡಿಯಲ್ಲಿ ಕೆಳಕಂಡ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ನಾಚನಹಳ್ಳಿ 3ನೇ ಹಂತದ ಬಡಾವಣೆ ನಿರ್ಮಿಸಲು ಭೂಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಸಂಖ್ಯೆ:ನ.ಅ.ಇ.648 ಎಂ.ಎ.ಬಿ.92, ದಿನಾಂಕ:18.08.1992ರಲ್ಲಿ ಅಂತಿಮ ಪ್ರಕಟಣೆ ಹೊರಡಿಸಲಾಗಿದೆ. ಈ ಜಮೀನುಗಳ ಪೈಕಿ ಅನುಸೂಚಿಯಲ್ಲಿ ಸೂಚಿಸಿರುವ ಜಮೀನನ್ನು ಈ ಕೆಳಕಂಡ ಷರತ್ತುಗೊಳಪಟ್ಟು ಭೂಸ್ವಾಧೀನ ಕ್ರಮದಿಂದ ಕೈಬಿಡಲಾಗಿದೆ.

ಸದರಿ ಜಮೀನಿನಲ್ಲಿ ಕಟ್ಟಡವನ್ನು ಕಟ್ಟಲು ಭೂ ಮಾಲೀಕರು ಇಚ್ಛಿಸಿದಲ್ಲಿ ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

**ಅನುಸೂಚಿ**

**ಜಿಲ್ಲೆ: ಮೈಸೂರು** **ತಾಲ್ಲೂಕು:ಮೈಸೂರು** **ಗ್ರಾಮ: ಕುಪ್ಪಲೂರು**

| ಕ್ರ. ಸಂ. | ಸರ್ವೆ ನಂ. | ಖಾತಾದಾರರ: ಅನುಭವದಾರರ ಹೆಸರು | ಸ್ವತ್ತಿನ ವಿವರ | | | | ಚೌತರ್ಫು | | | | ಭೂಸ್ವಾಧೀನದಿಂದ ಕೈಬಿಟ್ಟ ವಿಸ್ತೀರ್ಣ ಎ.ಗುಂ. |
|---|---|---|---|---|---|---|---|---|---|---|---|
| | | | ಖುಷ್ಕಿ ಎ.ಗುಂ. | ಭಾಗಾಯ್ತು ಎ.ಗುಂ. | ಖರಾಬು ಎ.ಗುಂ. | ಜುಮ್ಲಾ ಎ.ಗುಂ. | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1. | 44:3 | ವೆಂಕಟನ ಮಗ ದಾಸಿ ಅನು ಮನಗಮ್ಮ (ಪುಟ್ಟಮ್ಮ) | 0–24 | – | – | 0–24 | ಸ.ನಂ. 44:2ರ ಜಮೀನು | ಸ.ನಂ.41ರ ಜಮೀನು | ಸ.ನಂ.43ರ ಜಮೀನು | ಸ.ನಂ.35 ಹಾಗೂ 46ರ ಜಮೀನು | 0–24 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್–1155